# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1318
ಮಾನ್ಯ ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ, ಸಚಿವರು
ಉತ್ತರಿಸುವ ದಿನಾಂಕ : 15-03-2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರ ಮತ್ತು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಕೇಂದ್ರಗಳ ಅಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಬೆಂಗಳೂರು ನಗರ ಜಿಲ್ಲೆ ಒಳಗೊಂಡಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪ್ರವಾಸೋದ್ಯಮ ಇಲಾಖೆ ಗುರುತಿಸಿರುವ ಪ್ರವಾಸಿ ತಾಣಗಳಲ್ಲಿ ಹಾಗೂ ಇತರೆ ತಾಣಗಳಲ್ಲಿ ಇಲಾಖೆಗೆ ಸ್ವೀಕೃತವಾಗುವ ಪ್ರಸ್ತಾವನೆಗಳ ಮೇರೆಗೆ ಹಾಗೂ ಇಲಾಖೆಗೆ ಒದಗಿಸುವ ಅನುದಾನದ ಲಭ್ಯತೆಗೆ ಅನುಗುಣವಾಗಿ ಈ ಕೆಳಕಂಡ ಪ್ರವಾಸಿ ಮೂಲಸೌಲಭ್ಯಗಳನ್ನು ಪರಿಶೀಲಿಸಿ ಅಭಿವೃದ್ಧಿ ಪಡಿಸಲು ಕ್ರಮವಹಿಸಲಾಗುತ್ತದೆ.<br>1. ಯಾತ್ರಿ ನಿವಾಸ<br>2. ಡಾರ್ಮಿಟರಿ<br>3. ಪ್ರವಾಸಿ ತಾಣಗಳನ್ನು ಸಂಪರ್ಕಿಸುವ ಕೂಡುರಸ್ತೆ<br>4. ಶುದ್ಧ ಕುಡಿಯುವ ನೀರಿನ ಸೌಲಭ್ಯ<br>5. ಶೌಚಾಲಯ ಮತ್ತು ಸ್ನಾನಗೃಹ<br>6. ಪಾರ್ಕಿಂಗ್ ಸೌಲಭ್ಯ<br>7. ಪ್ರವಾಸಿ ಸೂಚನಾ ಫಲಕಗಳು<br>8. ಆಸನಗಳ ವ್ಯವಸ್ಥೆ<br>9. ಮೆಟ್ಟಿಲುಗಳು ಮತ್ತು ರೈಲಿಂಗ್ಸ್<br>10. ಪರಗೋಲ<br>11. ಪಾತ್ ವೇ ನಿರ್ಮಾಣ<br>12. ಪಾರಂಪರಿಕ ತಾಣಗಳಲ್ಲಿರುವ ಕೋಟೆ ಮತ್ತು ಸ್ಮಾರಕಗಳ ಸಂರಕ್ಷಣೆಯನ್ನು ರಾಜ್ಯ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಮೂಲಕ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತದೆ.<br>13. ಪ್ರವಾಸಿ ತಾಣಗಳಲ್ಲಿ ಅವಶ್ಯಕತೆಗನುಗುಣವಾಗಿ ಪ್ರವಾಸಿ ತಾಣದ ಸಮಗ್ರ ಅಭಿವೃದ್ಧಿಯ (Comprehensive Development) ಯೋಜನೆಗಳು.<br>14. ಇತರೆ ಪ್ರವಾಸಿ ಸೌಲಭ್ಯಗಳು. |
| ಆ) | ಬೆಂಗಳೂರು ನಗರ ಜಿಲ್ಲೆಯಲ್ಲಿ ಹೆರಿಟೇಜ್ ಟೂರಿಸಂ, ಹೆಲ್ತ್ ಟೂರಿಸಂ, ಎಜುಕೇಷನ್ ಟೂರಿಸಂ, ಚಿತ್ರೀಕರಣ ಟೂರಿಸಂಗಳ ಮೂಲಕ ಅಭಿವೃದ್ಧಿ ಮಾಡಲು ಸರ್ಕಾರ ಚಿಂತನೆ ಮಾಡಿದೆಯೇ; ಮಾಡಿದ್ದಲ್ಲಿ, ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಪ್ರವಾಸೋದ್ಯಮ ನೀತಿ 2020-25 ನ್ನು ಜಾರಿಗೆ ತರಲಾಗಿದೆ. ಈ ನೀತಿಯ ಅಡಿಯಲ್ಲಿ ಬೆಂಗಳೂರು ನಗರ ಜಿಲ್ಲೆ ಹಾಗೂ ರಾಜ್ಯದ ಇತರೆ ಎಲ್ಲಾ ಜಿಲ್ಲೆಗಳಲ್ಲಿ ಪಾರಂಪರಿಕ ಪ್ರವಾಸೋದ್ಯಮ, ಸ್ವಾಸ್ಥ್ಯ ಪ್ರವಾಸೋದ್ಯಮ (Wellness Tourism), ಶಿಕ್ಷಣ ಪ್ರವಾಸೋದ್ಯಮ, ಚಲನಚಿತ್ರ ಪ್ರವಾಸೋದ್ಯಮ ಹಾಗೂ ಇತರೆ ಪ್ರವಾಸೋದ್ಯಮ ಪರಿಕಲ್ಪನೆಗಳ ಅಭಿವೃದ್ಧಿಗೆ ಸಹ ಆದ್ಯತೆ ನೀಡಲು ಉದ್ದೇಶಿಸಲಾಗಿದೆ.<br><br>ಸದರಿ ಪ್ರವಾಸೋದ್ಯಮ ಯೋಜನೆಗಳಿಗೆ ಅನುಮೋದನೆ ನೀಡುವ ಕುರಿತು ಕಾರ್ಯ ವಿಧಾನ ಮಾರ್ಗಸೂಚಿಗಳನ್ನು ಸಿದ್ಧಪಡಿಸುವ ಕಾರ್ಯ ಪ್ರಗತಿಯಲ್ಲಿದೆ.<br><br>ಸದರಿ ಮಾರ್ಗಸೂಚಿಗಳು ಅನುಮೋದನೆಗೊಂಡ ನಂತರ ಹೂಡಿಕೆದಾರರಿಂದ ಸ್ವೀಕೃತವಾಗುವ ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಕ್ರಮ ವಹಿಸಲಾಗುವುದು. |

..2

**ಇ)** ಪ್ರವಾಸೋದ್ಯಮಗಳಿಗೆ ಸರ್ಕಾರ ಮೀಸಲಿಟ್ಟಿರುವ ಅನುದಾನವೆಷ್ಟು; ಪ್ರವಾಸೋದ್ಯಮದಿಂದ ಸರ್ಕಾರಕ್ಕೆ ಬಂದಿರುವ ಆದಾಯ ಎಷ್ಟು;

ಪ್ರವಾಸೋದ್ಯಮ ಇಲಾಖೆಗೆ 2020-21ನೇ ಸಾಲಿನ ಆಯವ್ಯಯದಲ್ಲಿ ರೂ.161.56 ಕೋಟಿಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಪ್ರವಾಸೋದ್ಯಮ ಇಲಾಖೆಗೆ ನೇರವಾಗಿ ಯಾವುದೇ ಆದಾಯ ಬರುವುದಿಲ್ಲ, ಆದರೆ, ಪ್ರವಾಸಿಗರು ಪ್ರವಾಸಿ ತಾಣಗಳಿಗೆ ಭೇಟಿ ನೀಡುವುದರಿಂದ ಸರ್ಕಾರಕ್ಕೆ ಪರೋಕ್ಷವಾಗಿ ತೆರಿಗೆ ರೂಪದಲ್ಲಿ ಆದಾಯ ಬರುತ್ತದೆ.

**ಈ)** ಕಳೆದ ಮೂರು ವರ್ಷಗಳಿಂದ ಪ್ರವಾಸೋದ್ಯಮ ಇಲಾಖೆಯಲ್ಲಿ ಎಷ್ಟು ವಿದ್ಯಾವಂತ ನಿರುದ್ಯೋಗಿಗಳು ಉದ್ಯೋಗವನ್ನು ಪಡೆದಿರುತ್ತಾರೆ. ನಿರುದ್ಯೋಗಿಗಳಿಗೆ ಉದ್ಯೋಗಗಳನ್ನು ಸೃಷ್ಟಿಸಲು ಸರ್ಕಾರ ಯಾವ ಯೋಜನೆಗಳನ್ನು ರೂಪಿಸಿದೆ?

ಪ್ರವಾಸೋದ್ಯಮ ಇಲಾಖೆಯಿಂದ ಕಳೆದ 3 ವರ್ಷಗಳಿಂದ ಎಸ್.ಸಿ.ಎಸ್.ಪಿ / ಟಿ.ಎಸ್.ಪಿ. ಯೋಜನೆ ಅಡಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಮತ್ತು ಸಾಮಾನ್ಯ ಯೋಜನೆ ಅಡಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಪ್ರವಾಸಿ ಟ್ಯಾಕ್ಸಿ ಖರೀದಿಸಿ ಸ್ವಯಂ ಉದ್ಯೋಗ ಕಲ್ಪಿಸಿಕೊಳ್ಳಲು ತಲಾ ರೂ.3.00 ಲಕ್ಷಗಳ ಸಹಾಯಧನವನ್ನು ಒದಗಿಸಲಾಗಿರುತ್ತದೆ. ವಿವರಗಳು ಈ ಕೆಳಕಂಡಂತೆ ಇದೆ.

| ವರ್ಷ | ವರ್ಗ | | | ಒಟ್ಟು |
|---|---|---|---|---|
| | ಪರಿಶಿಷ್ಟ ಜಾತಿಯ ಗುರಿ | ಪರಿಶಿಷ್ಟ ಪಂಗಡದ ಗುರಿ | ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗದ ಗುರಿ | |
| 2017-18 | 500 | 201 | 700 | 701 |
| 2018-19 | 400 | 157 | 300 | 857 |
| 2019-20 | 190 | 72 | 262 | 524 |
| ಒಟ್ಟು | 1090 | 430 | 1262 | 2082 |

ಇದಲ್ಲದೆ; ಪ್ರವಾಸೋದ್ಯಮದ ಬೆಳವಣಿಗೆಯಲ್ಲಿ ನಿರುದ್ಯೋಗಿ ಪದವೀಧರ ಯುವಕರು ಸಕ್ರಿಯವಾಗಿ ಪಾಲ್ಗೊಳ್ಳುವಂತಾಗಲು 2020-25ರ ಪ್ರವಾಸೋದ್ಯಮ ನೀತಿ ಅನ್ವಯ ಈ ಕೆಳಕಂಡ ಯೋಜನೆಗಳನ್ನು ರೂಪಿಸಲಾಗಿದೆ.

1. ಪ್ರವಾಸೋದ್ಯಮ ವಲಯದಲ್ಲಿ ಲಾಭದಾಯಕ ಉದ್ಯೋಗಕ್ಕಾಗಿ ಕೌಶಲ್ಯಾಭಿವೃದ್ಧಿಯನ್ನು ಒದಗಿಸುವುದು ಮತ್ತು ಉದ್ಯಮ ಶೀಲತೆಯನ್ನು ಪ್ರೋತ್ಸಾಹಿಸಲು ಅವಕಾಶ ಕಲ್ಪಿಸಲಾಗಿದೆ.
2. ನಿರುದ್ಯೋಗಿ ಪದವೀಧರ ಯುವಕರು ಸ್ವಯಂ ಉದ್ಯೋಗ ಮಾಡಲು ಉದ್ದೇಶಿಸಿ ಪ್ರವಾಸೋದ್ಯಮ ನೀತಿ 2020-25 ರಡಿ ಗುರುತಿಸಲ್ಪಟ್ಟಿರುವ ಪ್ರವಾಸೋದ್ಯಮ ವೈವಿಧ್ಯಗಳಲ್ಲಿ ಹೂಡಿಕೆ ಮಾಡಿ ಅಭಿವೃದ್ಧಿಪಡಿಸಿದರೆ ಅಂತಹವರಿಗೆ ಸಹಾಯಧನ ಹಾಗೂ ರಿಯಾಯತಿಗಳನ್ನು ಒದಗಿಸಲು ಈ ನೀತಿಯಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ.

ಸಂಖ್ಯೆ: ಟಿಒಆರ್ 39 ಟಿಡಿವಿ 2021

(ಸಿ.ಪಿ.ಯೋಗೇಶ್ವರ್)
ಪ್ರವಾಸೋದ್ಯಮ, ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು .